ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಇತರ ಧರ್ಮದಲ್ಲಿರುವ ಪರಿಶಿಷ್ಟ ಪಂಗಡದವರ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು) –

93 (95) ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಪರಿಶಿಷ್ಟ ಪಂಗಡದವರು ಯಾವುದೇ ಧರ್ಮಕ್ಕೆ ಸೇರಿದರೂ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ ಎಂಬುದಾಗಿ ಸರ್ಕಾರದ ನಿಲುವಿದ್ದು, ಈ ಸಂಬಂಧ ಪರಿಶಿಷ್ಟ ಪಂಗಡದವರು ಯಾವ ಯಾವ ಧರ್ಮದಲ್ಲಿ ಇದ್ದಾರೆ; (ಧರ್ಮವಾರು ಶೇಕಡವಾರು ಮಾಹಿತಿಯನ್ನು ನೀಡುವುದು)

(ಆ) ಹಿಂದೂ ಧರ್ಮವನ್ನು ಹೊರತುಪಡಿಸಿ ಇತರ ಧರ್ಮದಲ್ಲಿರುವ ಎಷ್ಟು ಪರಿಶಿಷ್ಟ ಪಂಗಡದವರು ಮೀಸಲಾತಿ ಸೌಲಭ್ಯವನ್ನು ಪಡೆದುಕೊಂಡಿರುತ್ತಾರೆ; (ಕಳೆದ 5 ವರ್ಷಗಳ ಮಾಹಿತಿ ನೀಡುವುದು)

(ಇ) ಸಂವಿಧಾನದ ಆಶಯದಂತೆ ಹಿಂದೂ ಧರ್ಮದ ಪರಿಶಿಷ್ಟ ಪಂಗಡದವರು ಮಾತ್ರವೇ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರೇ; ಈ ಕುರಿತು ಸರ್ಕಾರದ ನಿಲುವೇನು;

(ಈ) ಹಿಂದೂ ಧರ್ಮವನ್ನು ಹೊರತುಪಡಿಸಿ ಇತರ ಧರ್ಮಗಳಲ್ಲಿ ಪರಿಶಿಷ್ಟ ಪಂಗಡದ ಯಾವ ರೀತಿಯ ಜಾತಿ ಪ್ರಕಾರಗಳು ಇವೆ? (ಮಾಹಿತಿ ನೀಡುವುದು)